## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 435 |
| 02. | ಸದಸ್ಯರ ಹೆಸರು | : | ಶ್ರೀ. ಸಿ.ಆರ್. ಮನೋಹರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : | 19-07-2019 |
| 04. | ಉತ್ತರಿಸುವ ಸಚಿವರು. | : | ಗೃಹ ಸಚಿವರು. |

| ಕ್ರಮ ಸಂಖ್ಯೆ | ವಿಷಯ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪೊಲೀಸ್ ಇಲಾಖೆಯು ಹಲವಾರು ಪ್ರಕರಣಗಳಲ್ಲಿ ವಶಕ್ಕೆ ಪಡೆದಿರುವ ದ್ವಿಚಕ್ರ, ತ್ರಿಚಕ್ರ, ಲಘು ಮತ್ತು ಭಾರಿ ಮೋಟಾರ್ ವಾಹನ ಗಳ ಸಂಖ್ಯೆಯೆಷ್ಟು; | ರಾಜ್ಯದಲ್ಲಿ ಪೊಲೀಸ್ ಇಲಾಖೆಯು ಹಲವಾರು ಪ್ರಕರಣಗಳಲ್ಲಿ ವಶಕ್ಕೆ ಪಡೆದಿರುವ ದ್ವಿಚಕ್ರ, ತ್ರಿಚಕ್ರ, ಲಘು ಮತ್ತು ಭಾರಿ ಮೋಟಾರ್ ವಾಹನಗಳ ಸಂಖ್ಯೆ ಈ ಕೆಳಗಿನಂತಿದೆ. (ಕೆಳಗಿನ ಕೋಷ್ಟಕ ನೋಡಿ) |
| ಆ | ಇಂತಹ ವಾಹನಗಳು ಬಹಳಷ್ಟು ವರ್ಷಗಳಿಂದ ಪೊಲೀಸ್ ಇಲಾಖೆಯ ವಶದಲ್ಲಿದ್ದು ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಅಪರಾಧ ಪ್ರಕರಣಗಳಲ್ಲಿ ವಶಕ್ಕೆ ಪಡೆದ ವಾಹನಗಳು, ಅಪಘಾತ ಪ್ರಕರಣಗಳಲ್ಲಿನ ವಾಹನಗಳು ಹಾಗೂ ಕಳುವಾದ ವಾಹನಗಳನ್ನು ಪತ್ತೆ ಹಚ್ಚಿ, ನಿಯಮಾನುಸಾರ ಜಪ್ತಿ ಪಡಿಸಿಕೊಂಡು, ಈ ವಾಹನಗಳನ್ನು ಠಾಣೆಯ ಆವರಣಗಳಲ್ಲಿ ಹಾಗೂ ಇಲಾಖೆಗೆ ಸಂಬಂಧಿಸಿದ ಸ್ಥಳಗಳಲ್ಲಿ ಸುರಕ್ಷಿತವಾಗಿ ಇಡಲಾಗುತ್ತಿದ್ದು, ಕಾಲಕಾಲಕ್ಕೆ ನಿಯಮಾನುಸಾರ ವಿಲೇವಾರಿ ಮಾಡಲಾಗುತ್ತಿರುವುದರಿಂದ, ವಾಹನಗಳು ಹಾಳಾಗುವ ಅವಕಾಶಗಳಿರುವುದಿಲ್ಲ. |
| ಇ | *ಈ ರೀತಿ ನಷ್ಟವಾಗುತ್ತಿರುವುದನ್ನು ತಡೆಯುವುದಕ್ಕೆ ಯಾವುದಾದರೊಂದು ಯೋಜನೆಯನ್ನು ರೂಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಯೋಜನೆಯ ಮಾಹಿತಿ ನೀಡುವುದು)* | ➢ ಈಗಾಗಲೇ ಠಾಣೆಯ ಆವರಣಗಳು ಅಲ್ಲದೆ ಪೊಲೀಸ್ ಇಲಾಖೆಯ ನಗರ/ಜಿಲ್ಲಾ ಘಟಕಗಳಲ್ಲಿ ಸಶಸ್ತ್ರ ಮೀಸಲು ಪಡೆಯ ಕೇಂದ್ರಗಳಲ್ಲಿ ವಶಪಡಿಸಿಕೊಂಡ ವಾಹನಗಳನ್ನು ಹಾಳಾಗದಂತೆ ಸಂರಕ್ಷಿಸಿಡಲು ಕ್ರಮ ಕೈಗೊಳ್ಳಲಾಗಿದೆ.<br>➢ ಬೆಂಗಳೂರು ಮಹಾನಗರದ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯಲ್ಲಿನ ಎಲ್ಲಾ ವಿಭಾಗಗಳ ಕಾನೂನು ಸುವ್ಯವಸ್ಥೆ ಪೊಲೀಸ್ ಠಾಣೆ ಹಾಗೂ ಸಂಚಾರ ಪೊಲೀಸ್ ಠಾಣೆ ಮತ್ತು ಇತರೆ ವಿಭಾಗಗಳಾದ ಸಿಸಿಬಿ, ಸೈಬರ್ ಕ್ರೈಂ ಪೊಲೀಸ್ ಠಾಣೆಗಳಲ್ಲಿ ಜಪ್ತಿ ಮಾಡಲಾಗುವ ವಾಹನಗಳನ್ನು ವಿಲೇವಾರಿಗೊಳಿಸುವ ತನಕ ಸಂರಕ್ಷಿಸುವ ಸಲುವಾಗಿ ಈ |

| ವರ್ಷ | ದ್ವಿಚಕ್ರ | ತ್ರಿಚಕ್ರ | ಲಘು ವಾಹನ | ಭಾರೀ ವಾಹನ |
|---|---|---|---|---|
| 2016 | 16452 | 1649 | 7228 | 6596 |
| 2017 | 19090 | 441 | 7599 | 6200 |
| 2018 | 18627 | 1528 | 7223 | 5109 |
| 2019 (ಜೂನ್ 30 ರವರೆಗೆ) | 11192 | 961 | 4633 | 2798 |

| | | |
|---|---|---|
| | | ಕೆಳಕಂಡ ಸ್ಥಳಗಳಲ್ಲಿ ವಾಹನಗಳ ಪಾ[illegible]ಗಾಗಿ (ಜಪ್ತಿಪಡಿಸಿಕೊಂಡ) ಜಮೀನು ಸರ್ಕಾರದಿಂದ ಹಂಚಿಕೆಯಾಗಿರುತ್ತದೆ.<br>1. ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಮಲ್ಲಸಂದ್ರ ಗ್ರಾಮದ ಸರ್ವೆ ನಂ. 35 ರಲ್ಲಿ 03 ಎಕರೆ ಜಮೀನು.<br>2. ಬೆಂಗಳೂರು ಜಿಲ್ಲೆ ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ ಕೆ ಚೂಡಹಳ್ಳಿ ಗ್ರಾಮದ ಸರ್ವೆ ನಂ. 68 ರಲ್ಲಿ 02 ಎ/ಗುಂ ಜಮೀನು<br>3. ಎಸ್.ಬಂಗೀಪುರ ಗ್ರಾಮದ ಸರ್ವೆ ನಂ. 79 ರಲ್ಲಿ 13 ಎಕರೆ ಜಮೀನು<br><br>ಈ ಮೂರು ಸ್ಥಳಗಳಲ್ಲಿ ವಾಹನಗಳಿಗೆ ನಿಲುಗಡೆ ವ್ಯವಸ್ಥೆ ಮಾಡಲು ಸರ್ಕಾರದ ಅಧಿಸೂಚನೆ ಹೊರಡಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆ ಹಂತದಲ್ಲಿರುತ್ತದೆ. |
| ಈ | ಹಾಗಿಲ್ಲದಿದ್ದಲ್ಲಿ, ರಾಷ್ಟ್ರೀಯ ನಷ್ಟವಾಗುತ್ತಿರುವುದನ್ನು ತಡೆಯುವ ಯೋಜನೆಯನ್ನು ರೂಪಿಸಲು ಸರ್ಕಾರಕ್ಕಿರುವ ತೊಂದರೆಗಳೇನು? (ಮಾಹಿತಿ ನೀಡುವುದು). | ಮೇಲಿನಂತೆ ಕ್ರಮಗಳನ್ನು ಕೈಗೊಳ್ಳಲಾಗುತ್ತಿರುವುದರಿಂದ, ರಾಷ್ಟ್ರೀಯ ನಷ್ಟವಾಗುವ ಅವಕಾಶಗಳಿರುವುದಿಲ್ಲ. ಈ ರೀತಿ ಯೋಜನೆ ರೂಪಿಸುತ್ತಿರುವುದರಿಂದ ಸರ್ಕಾರಕ್ಕೆ ಯಾವುದೇ ತೊಂದರೆಗಳಿರುವುದಿಲ್ಲ. |

**ಹೆಚ್‌ಡಿ 219 ಎಸ್‌ಎಸ್‌ಟಿ 2019**

(ಎಂ.ಬಿ.ಪಾಟೀಲ)
ಗೃಹ ಸಚಿವರು